ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಗಂಗೇನ ಹಳ್ಳಿಯ ಸರ್ವೇ ನಂ.1 ರಿಂದ 99 ರ ವರೆಗಿನ ಮಾಹಿತಿ ಕುರಿತು

ಶ್ರೀ ಎನ್.ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) :-

1202 (1334) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ನಗರ ಜಿಲ್ಲೆಯ ಗಂಗೇನ ಹಳ್ಳಿಯ ಸರ್ವೇ ನಂ.1 ರಿಂದ 99 ವರ್ತೂರು ಸರ್ವೇ ನಂ.7 ರಿಂದ 10, ವರ್ತೂರು ನರಸೀಪುರ ಸರ್ವೇ ನಂ. 1 ರಿಂದ 35 ಹಾಗೂ ಪೆದ್ದನ ಪಾಳ್ಯ ಸರ್ವೇ ನಂ. 17 ರಿಂದ 20 ಪ್ರಸ್ತುತ ಯಾರ ಹೆಸರಿನಲ್ಲಿದೆ; ಈ ಜಾಗ ಅವರ ಹೆಸರಿಗೆ ವರ್ಗಾವಣೆಯಾಗಿರುವುದು ಯಾವಾಗ, ಯಾವ ಆದೇಶದ ಮೇಲೆ ಮಾಡಲಾಗಿದೆ;

(ಆ) ಬೆಂಗಳೂರು ನಗರ ಜಿಲ್ಲೆಯ ಗಂಗೇನ ಹಳ್ಳಿಯ ಸರ್ವೇ ನಂ. 1 ರಿಂದ 99, ವರ್ತೂರು ಸರ್ವೇ ನಂ. 7 ರಿಂದ 10, ವರ್ತೂರು ನರಸೀಪುರ ಸರ್ವೇ ನಂ.1 ರಿಂದ 35 ಹಾಗೂ ಪೆದ್ದನ ಪಾಳ್ಯ ಸರ್ವೇ ನಂ. 17 ರಿಂದ 20ಕ್ಕೆ ಸಂಬಂಧಿಸಿದ ಕೈಬರಹದ ಪಹಣಿ, ಖೇತುವಾರು ಮತ್ತು ಆಕಾರ್ ಬಂದ್, ಮೈಸೂರು ಸೆಟಲ್‌ಮೆಂಟ್ ಪ್ರತಿ, ಇನಾಂ ಕುರಿತ ಡಿ.ಸಿ. ಆದೇಶಗಳಲ್ಲಿ ಈ ಜಮೀನಿನ ಮಾಲೀಕರೆಂದು ಯಾರ ಹೆಸರನ್ನು ನಮೂದಿಸಲಾಗಿದೆ; (ದಾಖಲೆಗಳ ಪ್ರತಿಗಳನ್ನು ಒದಗಿಸುವುದು)

(ಇ) ಬೆಂಗಳೂರು ನಗರ ಜಿಲ್ಲೆಯ ಗಂಗೇನ ಹಳ್ಳಿಯ ಸರ್ವೇ ನಂ. 1 ರಿಂದ 99, ವರ್ತೂರು ಸರ್ವೇ ನಂ. 7 ರಿಂದ 10, ವರ್ತೂರು ನರಸೀಪುರ ಸರ್ವೇ ನಂ.1 ರಿಂದ 35, ಪೆದ್ದನ ಪಾಳ್ಯ ಸರ್ವೇ ನಂ. 17 ರಿಂದ 20 ರ ಜಮೀನುಗಳನ್ನು ಮಂಜೂರು ಮಾಡುವಂತೆ ಕೋರಿ ಮನವಿ ಸಲ್ಲಿಸಿದವರು ಯಾರು? (ವಿವರ ನೀಡುವುದು)